# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 363
ಸದಸ್ಯರ ಹೆಸರು : ಶ್ರೀ. ಎಂ.ಪಿ ಸುನೀಲ್ ಸುಬ್ರಮಣಿ
ಉತ್ತರಿಸಬೇಕಾದ ಸಚಿವರು : ಸಾರಿಗೆ ಸಚಿವರು
ಉತ್ತರಿಸಬೇಕಾದ ದಿನಾಂಕ : 18-07-2019

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೊಡಗು ಜಿಲ್ಲೆಯಲ್ಲಿನ ಬಸ್ ನಿಲ್ದಾಣಗಳಲ್ಲಿ ಸಾರ್ವಜನಿಕರಿಗೆ ಕುಡಿಯುವ ನೀರಿನ ಸೌಲಭ್ಯ ಕಲ್ಪಿಸಲಾಗಿದೆಯೇ; (ವಿವರ ನೀಡುವುದು) ಇಲ್ಲವಾದಲ್ಲಿ, ಯಾವಾಗ ಸದರಿ ಸೌಲಭ್ಯವನ್ನು ಕಲ್ಪಿಸಲಾಗುವುದು; (ವಿವರ ನೀಡುವುದು) | ಕೊಡಗು ಜಿಲ್ಲೆಯಲ್ಲಿ ಕ.ರಾ.ರ.ಸಾ.ನಿಗಮದ 05 ಬಸ್ ನಿಲ್ದಾಣಗಳಿರುತ್ತವೆ.<br>ಈ ಬಸ್ ನಿಲ್ದಾಣಗಳಲ್ಲಿ ಕುಡಿಯುವ ನೀರಿನ ವ್ಯವಸ್ಥೆಗಾಗಿ ಟ್ರಫ್ ನಿರ್ಮಿಸಲಾಗಿದೆ ಹಾಗೂ ಕೊಳವೆ ಬಾವಿಯಿಂದ ನೀರು ಪೂರೈಸಲಾಗುತ್ತಿದ್ದು, ತೆರೆದ ನೀರು ಸಂಗ್ರಹಣ ಟ್ಯಾಂಕ್ ಮುಖಾಂತರ ಶೇಖರಣೆ ಮಾಡಿ ಸರಬರಾಜು ಮಾಡಲಾಗುತ್ತಿದೆ. |
| ಆ | ಜಿಲ್ಲೆಯಲ್ಲಿನ ಬಸ್ ನಿಲ್ದಾಣಗಳಲ್ಲಿ ಧೂಮಪಾನ ನಿಷೇಧಕ್ಕೆ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಕೊಡಗು ಜಿಲ್ಲೆಯ ಎಲ್ಲಾ ಬಸ್ ನಿಲ್ದಾಣಗಳಲ್ಲಿ ಧೂಮಪಾನ ನಿಷೇಧಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>1) "ಧೂಮಪಾನ ನಿಷೇಧಿತ ಪ್ರದೇಶ, ಇಲ್ಲಿ ಧೂಮಪಾನ ಮಾಡುವುದು ಅಪರಾಧ " ಧೂಮಪಾನ ನಿಷೇಧ ಕಾನೂನನ್ನು ಉಲ್ಲಂಘನೆ ಮಾಡಿದವರ ವಿರುದ್ಧ ಅಧಿನಿಯಮ 2003 ರನ್ವಯ ರೂ.200-00 ದಂಡ ವಿಧಿಸಲಾಗುವುದು ಎಂಬ ಮಾಹಿತಿಯ ಫಲಕಗಳನ್ನು ಸಾರ್ವಜನಿಕರ ಗಮನಕ್ಕೆ ಪ್ರದರ್ಶಿಸಲಾಗಿದೆ.<br>2) ಬಸ್ ನಿಲ್ದಾಣಗಳನ್ನು ಧೂಮಪಾನ ಮುಕ್ತ ವಲಯಗಳನ್ನಾಗಿಸಲು ತಪಾಸಣೆಗಾಗಿ ಸಂಚಾರ ನಿಯಂತ್ರಕರು ಮತ್ತು ಭದ್ರತಾ ರಕ್ಷಕರನ್ನು ನಿಯೋಜಿಸಲಾಗಿದೆ.<br>3) ಧೂಮಪಾನ ನಿಷೇಧ ಕಾನೂನನ್ನು ಉಲ್ಲಂಘಿಸಿ, ಏಪ್ರಿಲ್ 2018 ರಿಂದ ಜೂನ್ 2019ರ ಅವಧಿಯಲ್ಲಿ ಬಸ್ ನಿಲ್ದಾಣಗಳಲ್ಲಿ ಧೂಮಪಾನ ಮಾಡಿದ 151 ಸಾರ್ವಜನಿಕರಿಗೆ ರೂ.30,200/- ದಂಡ ವಿಧಿಸಲಾಗಿರುತ್ತದೆ. |
| ಇ | ಜಿಲ್ಲೆಯಲ್ಲಿನ ಬಸ್ ನಿಲ್ದಾಣಗಳಲ್ಲಿ ಸ್ವಚ್ಛತೆಯನ್ನು ಕಾಪಾಡಲು ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಬಸ್ ನಿಲ್ದಾಣಗಳ ಸ್ವಚ್ಛತಾ ಕಾರ್ಯ ನಿರ್ವಹಿಸಲು ಟೆಂಡರ್ ಮೂಲಕ ಗುತ್ತಿಗೆದಾರರನ್ನು ಆಯ್ಕೆ ಮಾಡಿ ಕರಾರು ಒಪ್ಪಂದ ಮಾಡಿಕೊಳ್ಳಲಾಗಿದೆ. ಗುತ್ತಿಗೆದಾರರು ಕೊಡಗು ಜಿಲ್ಲೆಯಲ್ಲಿನ ಮಡಿಕೇರಿ, ಸೋಮವಾರಪೇಟೆ, ಕುಶಾಲನಗರ, ವಿರಾಜಪೇಟೆ ಮತ್ತು ಹೆಬ್ಬಾಲೆ ಬಸ್ ನಿಲ್ದಾಣಗಳ ಸ್ವಚ್ಛತಾ ಕಾರ್ಯವನ್ನು ನಿರ್ವಹಿಸುತ್ತಿರುತ್ತಾರೆ.<br>ಬಸ್ ನಿಲ್ದಾಣದ ಮೇಲ್ವಿಚಾರಕರು ಮತ್ತು ಘಟಕ ವ್ಯವಸ್ಥಾಪಕರು ಬಸ್ ನಿಲ್ದಾಣವನ್ನು ಪರಿಶೀಲಿಸಿ ಶುಚಿತ್ವ ನಿರ್ವಹಿಸುವ ಸಂಬಂಧ ಗುತ್ತಿಗೆದಾರರಿಗೆ ಕಾಲ-ಕಾಲಕ್ಕೆ ಸೂಕ್ತ ನಿರ್ದೇಶನವನ್ನು ನೀಡುತ್ತಿರುತ್ತಾರೆ ಹಾಗೂ ಶುಚಿತ್ವ ಕಾರ್ಯ ನಿರ್ವಹಣೆಯ ಉಸ್ತುವಾರಿ ನಡೆಸುತ್ತಿದ್ದಾರೆ. |

ಸಂಖ್ಯೆ: ಟಿಡಿ 32 ಟಿಸಿಕ್ಯೂ 2019

(ಡಿ.ಸಿ.ತಮ್ಮಣ್ಣ)
ಸಾರಿಗೆ ಸಚಿವರು